KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೧ | ಬೆಂಗಳೂರು, ಗುರುವಾರ, ಏಪ್ರಿಲ್ ೨೦, ೨೦೦೬ (ಚೈತ್ರ ೩೦, ಶಕ ವರ್ಷ ೧೯೨೮) | ಸಂಚಿಕೆ ೧೬

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರ ಅಂಬುಗದಲ್ಲಿರುವ ಜಮೀನನ್ನು ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆಗೆ ನೀಡುವ ಬಗ್ಗೆ.

**ಓದಲಾಗಿದೆ:** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಪತ್ರ ಸಂಖ್ಯೆ: ಸರೇಕೃಕ್ಷೇ/ ಅಂಹಾ/ ಜಮೀನು/ 71/ 2002-03, ದಿನಾಂಕ: 15.10.2005.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಹಾಸನ ಜಿಲ್ಲೆ, ಅಂಬುಗ ಸರ್ಕಾರಿ ಕೃಷಿ ಕ್ಷೇತ್ರದ ಜಮೀನಿನಲ್ಲಿ ಮೊರಾರ್ಜಿ ವಸತಿ ನಿರ್ಮಿಸಲು 10 ರಿಂದ 15 ಎಕರೆ ಜಮೀನನ್ನು ಹಸ್ತಾಂತರಿಸಲು ಜಿಲ್ಲಾಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಹಾಸನರವರು ಕೋರಿರುವುದರಿಂದ ಸದರಿ ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರದಲ್ಲಿ ಸರ್ವೆ ನಂ.307 ರಲ್ಲಿರುವ 21.16 ಎಕರೆ ಜಮೀನಿನಲ್ಲಿ 15.00 ಎಕರೆ ಜಮೀನನ್ನು ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆಗೆ ಉಚಿತವಾಗಿ ನೀಡುವುದಕ್ಕೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಒಪ್ಪಿ ಈ ಕುರಿತು ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 32 ರೇಯೋವಿ 2005, ದಿನಾಂಕ: 3ನೇ ಏಪ್ರಿಲ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾಸನ ಜಿಲ್ಲೆಯ ಹಾಸನ ತಾಲ್ಲೂಕಿನ ಅಂಬುಗ ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರದ ವ್ಯಾಪ್ತಿಯಲ್ಲಿರುವ ಸರ್ವೆ ನಂ.307ರಲ್ಲಿರುವ ಒಟ್ಟು 21.16 ಎಕರೆ ಜಮೀನಿನಲ್ಲಿ 15.00 ಎಕರೆ ಜಮೀನನ್ನು ಮೊರಾರ್ಜಿ ದೇಸಾಯಿ ವಸತಿ ಶಾಲೆಯ ಕಟ್ಟಡ ನಿರ್ಮಾಣಕ್ಕಾಗಿ ಹಿಂದುಳಿದ ವರ್ಗಗಲ ಹಾಗೂ ಅಲ್ಪಸಂಖ್ಯಾತರ ಇಲಾಖೆಗೆ ಸಾರ್ವಜನಿಕ ಹಿತದೃಷ್ಟಿಯಿಂದ ಉಚಿವಾಗಿ ಹಸ್ತಾಂತರಿಸಲು ಆದೇಶಿಸಿದೆ.

ಈ ಆದೇಶವನ್ನು ಕಂದಾಯ ಇಲಾಖೆಯ ಟಿಪ್ಪಣಿ ಸಂಖ್ಯೆ: ಆರ್‌ಡಿ 172 ಎಲ್‌ಜಿಹೆಚ್ 2005, ದಿನಾಂಕ: 28.01.2006ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಭಾರತಿ ಆರ್. ನಾಯಕ್**
ಪೀಠಾಧಿಕಾರಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ರೇಷ್ಮೆ).

ಪಿ.ಆರ್.531

### COMMERCE AND INDUSTRIES SECRETARIAT
### CORRIGENDOM
**No. CI 43 SGF 06, Bangalore, Dated: 14th March, 2006**

In the Government Notification No. CI 63 SGF 03 Dated: 21.02.2004 for the words appearing in Para 3(1) in the Notification as.

"The crushing capacity of M/s Bharat Sugar Mills Ltd., being 2500 TCD. The quantity of Sugarcane required by the factory during a year is about 4.5 to 5 lakhs M.Ts"

MAY BE READ AS

"The crushing capacity of M/s Bharat Sugar Mills Ltd., being 3500 TCD. The quantity of sugar cane required by the factory during a year is about 6.00 to 7.00 lakhs Mts".

By Order and in the Name of the Governor of Karnataka,

**P. ANANDAKUMAR**

PR-530

Desk Officer, (Sugar),

Commerce & Industries Department.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಬೆಂಗಳೂರು ಮಹಾನಗರ ಪ್ರದೇಶದ 7 ನಗರಸಭೆಗಳು ಮತ್ತು 1 ಪುರಸಭೆಯ ವ್ಯಾಪ್ತಿಯಲ್ಲಿ ಬರುವ 600 ಚದರ ಅಡಿಗಳ ವರೆಗೆ ಪ್ರದೇಶ ಹೊಂದಿರುವ ಕೊಳಚೆ ಪ್ರದೇಶಗಳ ವ್ಯಾಖ್ಯಾಯನದಡಿಯಲ್ಲಿ ಸೇರಿರುವ ಬಡಜನರಿಗೂ ಸಹ ಫಲಾನುಭವಿಗಳ ವಂತಿಗೆಯನ್ನು ಕಟ್ಟುವುದರಿಂದ ವಿನಾಯಿತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ನಅಇ 27 ಎಂಎನ್‌ಐ 2000, ದಿನಾಂಕ: 26.12.2003.

2. ಸರ್ಕಾರದ ಆದೇಶ ಸಂಖ್ಯೆ: ನಅಇ 36 ಎಂಎನ್‌ಐ 2004, ದಿನಾಂಕ: 13.02.2004.

3. ಸರ್ಕಾರದ ಆದೇಶ ಸಂಖ್ಯೆ: ನಅಇ 36 ಎಂಎನ್‌ಐ 2004, ದಿನಾಂಕ: 26.03.2004.

4. ಸರ್ಕಾರದ ಆದೇಶ ಸಂಖ್ಯೆ: ನಅಇ 145 ಎಂಎನ್‌ಐ 2004, ದಿನಾಂಕ: 28.02.2005 ಮತ್ತು 09.03.2005.

5. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 18.01.2006ರಂದು ನಡೆದ ಯೋಜನಾ ಚಾಲನಾ ಸಮಿತಿಯ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 26.12.2003ರ ಆದೇಶದಲ್ಲಿ ಬೆಂಗಳೂರು ಮಹಾನಗರ ಪ್ರದೇಶದಲ್ಲಿ ಬರುವ ಬೊಮ್ಮನಹಳ್ಳಿ, ಬ್ಯಾಟರಾಯನಪುರ, ದಾಸರಹಳ್ಳಿ, ಕೃಷ್ಣರಾಜಪುರಂ, ಮಹದೇವಪುರ, ರಾಜಾರಾಜೇಶ್ವರಿನಗರ ಮತ್ತು ಯಲಹಂಕ 7 ನಗರಸಭೆಗಳು ಮತ್ತು 1 ಕೆಂಗೇರಿ ಪುರಸಭೆಗೆ ರೂ.6,58,64 ಕೋಟಿ ಒಟ್ಟು ಅಂದಾಜು ವೆಚ್ಚದಲ್ಲಿ ನೀರು ಪೂರೈಕೆ ಹಾಗೂ ಒಳಚರಂಡಿ ಯೋಜನೆಯನ್ನು ಅನುಷ್ಠಾನಗೊಳಿಸಲು ಮಂಜೂರಾತಿ ನೀಡಲಾಗಿದೆ. ಸದರಿ ಆದೇಶದಲ್ಲಿ ನಮೂದಿಸಿರುವಂತೆ ಯೋಜನೆಯಲ್ಲಿ ಪಾಲ್ಗೊಳ್ಳುವ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳು ಗೃಹ ಬಳಕೆದಾರರಿಂದ ಪ್ರತಿ ಸ್ವತ್ತಿಗೆ ರೂ.8,500/- ಮತ್ತು ಗೃಹೇತರ ಬಳಕೆದಾರರಿಂದ ಪ್ರತಿ ಸ್ವತ್ತಿಗೆ ರೂ.17,000/-ರಂತೆ ಒಂದು ಬಾರಿ ಬಂಡವಾಳ ವಂತಿಗೆಯನ್ನು ಸಂಗ್ರಹಿಸಲು ಸೂಚಿಸಲಾಗಿದೆ. ಈ ವಂತಿಗೆಯ ಮೊತ್ತವು ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ವಿಧಿಸುವ ಮಾರ್ಗ ಮತ್ತು ಸಂಪರ್ಕ ವೆಚ್ಚ ಹಾಗೂ ಸ್ವತ್ತಿನ ಮಾಲೀಕರು ನಗರ ಸ್ಥಳೀಯ ಸಂಸ್ಥೆಗಳಿಗೆ ಸಂದಾಯ ಮಾಡಬೇಕಾದ ರಸ್ತೆ ಅಗೆಯುವ ವೆಚ್ಚಗಳು ಸೇರಿರುವುದಿಲ್ಲ.

ಮೇಲೆ (2) ಮತ್ತು (3)ರಲ್ಲಿ ಓದಲಾದ ದಿನಾಂಕ: 13.02.2004 ಮತ್ತು 26.03.2004 ಆದೇಶಗಳಲ್ಲಿ ಫಲಾನುಭವಿಗಳು ಬಂಡವಾಳ ವಂತಿಗೆಯ (ಬಿಸಿಸಿ) ವಿನ್ಯಾಸವನ್ನು (structure) ಸರ್ಕಾರವು ನಿರ್ದಿಷ್ಟವಾಗಿ ತಿಳಿಸಿದೆ 40ಕಿx60ಕಿ ರ ವಿನ್ಯಾಸದ ನಿವೇಶನಗಳಿಗೆ ಮತ್ತು 1200 ಚದರಡಿ ವರೆಗಿನ ವಸತಿ ಸಮುಚ್ಛಾಲಯಗಳಿಗೆ ರೂ.10,000/- ಮತ್ತು 40ಕಿx60ಕಿ ಅಳತೆ ಮೀರಿದ ನಿವೇಶನಗಳಿಗೆ ಹಾಗೂ 1200 ಚದರಡಿ ಮೀರಿದ ವಸತಿ ಸಮುಚ್ಛಾಲಯಗಳಿಗೆ ರೂ.15,000/- ಫಲಾನುಭವಿ ಬಂಡವಾಳ ವಂತಿಗೆಯ ಸಂಗ್ರಹಣೆಯನ್ನು ನಿಗದಿಪಡಿಸಿದೆ. ಗೃಹೇತರ ಸ್ವತ್ತುಗಳು/ ವಾಣಿಜ್ಯ ಸ್ವತ್ತುಗಳಿಗೆ ಸಂಬಂಧಿಸಿದಂತೆ ವಂತಿಗೆಯನ್ನು ರೂ.20,000/- ನಿಗದಿಪಡಿಸಿ ಸದರಿ ವಂತಿಗೆ ಸಂಗ್ರಹಣೆಗೆ ಕಡೇ ದಿನಾಂಕವನ್ನು 31.07.2004 ಎಂದು ಪ್ರಕಟಿಸಲಾಗಿತ್ತು. ಇದಾದ ನಂತರ ಹೆಚ್ಚುವರಿ 5000/- ಮೊತ್ತವನ್ನು ಪಾವತಿ ಮಾಡಬೇಕೆಂದು ಆದೇಶಿಸಿತ್ತು.

ಮೇಲೆ (5)ರಲ್ಲಿ ಓದಲಾದ ದಿನಾಂಕ: 28.02.2005 ಮತ್ತು 09.03.2005ರ ಆದೇಶಗಳಲ್ಲಿ ಬೆಂಗಳೂರು ಮಹಾನಗರ ಪ್ರದೇಶದಲ್ಲಿ ಬರುವ ಬೊಮ್ಮನಹಳ್ಳಿ, ಬ್ಯಾಟರಾಯನಪುರ, ದಾಸರಹಳ್ಳಿ, ಕೃಷ್ಣರಾಜಪುರಂ, ಮಹದೇವಪುರ, ರಾಜಾರಾಜೇಶ್ವರಿನಗರ ಮತ್ತು ಯಲಹಂಕ 7 ನಗರಸಭೆಗಳು ಮತ್ತು 1 ಕೆಂಗೇರಿ ಪುರಸಭೆ ಪ್ರದೇಶಗಳಲ್ಲಿ ಬರುವ ವಿವಿಧ ಮಾದರಿಯ ಆಸ್ತಿಗಳಿಗೆ ಫಲಾನುಭವಿಗಳಿಗೆ ಬಂಡವಾಳ ವಂತಿಕೆ (ಬಿ.ಸಿ.ಸಿ.) ಸಂಗ್ರಹಣೆ ಕುರಿತು ಪರಿಷ್ಕೃತ ವಿನ್ಯಾಸಕ್ಕೆ ಸರ್ಕಾರವು ಅನುಮೋದನೆ ನೀಡಿ, ಬಂಡವಾಳ ವಂತಿಗೆಯನ್ನು ಸಂಗ್ರಹಿಸುವ ದಿನಾಂಕವನ್ನು 31ನೇ ಜುಲೈ 2005ರವರೆಗೆ ವಿಸ್ತರಿಸಿ ಆದೇಶಿಸಲಾಗಿತ್ತು.

ಮೇಲೆ (6)ರಲ್ಲಿ ಓದಲಾದ ದಿನಾಂಕ: 18.01.2006ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ GBWASP ಯೋಜನಾ ಚಾಲನಾ ಸಮಿತಿಯ ಸಭೆಯ ನಡವಳಿಗಳಲ್ಲಿ 600 ಚದರ ಅಡಿಗಳವರೆಗೆ ಪ್ರದೇಶ ಹೊಂದಿರುವ ಕೊಳಚೆ ಪ್ರದೇಶಗಳ ವ್ಯಾಖ್ಯಾಯನದಡಿಯಲ್ಲಿ ಸೇರದಿರುವ ಹಲವಾರು ನಿವಾಸಿಗಳು ಫಲಾನುಭವಿಗಳ ವಂತಿಗೆಯನ್ನು ನೀಡಬೇಕಾಗುತ್ತದೆ. ಈ ನಿವಾಸಿಗಳು ಬಡಜನರ ವರ್ಗದಡಿಯಲ್ಲಿ ಸಹ ಬರುವುದರಿಂದ ಕೊಳಚೆ ಪ್ರದೇಶಗಳ ನಿವಾಸಿಗಳಾಗಿ ಅವರನ್ನೂ ಸಹ ಫಲಾನುಭವಿಗಳ ವಂತಿಗೆಯನ್ನು ಕಟ್ಟುವುದರಿಂದ ವಿನಾಯಿತಿ ನೀಡಲು ಕಾರ್ಯಕಾರಿ ತಂಡವು (working group) ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ 600 ಚದರ ಅಡಿಗಳನ್ನೊಳಗೊಂಡ ನಿವೇಶನಗಳ ಮೇಲೆ ಇರುವಂತಹ ಮನೆಗಳಿಂದ ಮೂಲ ವಂತಿಗೆ ಪಡೆಯುವುದನ್ನು ನಿಲ್ಲಿಸಲು ತೀರ್ಮಾನಿಸಿ, ಈಗಾಗಲೇ ಇಂತಹ ಕೆಲವು ನಿವೇಶನದಾರರು ವಂತಿಗೆಯನ್ನು ಕಟ್ಟಿದ್ದರೆ ಅಂತಹವರನ್ನು ಗುರುತಿಸಿ ಅಂತಹ ಮೊತ್ತವನ್ನು ಮುಂದಿನ ಬಿಲ್ಲುಗಳು ಹಾಗೂ ಸಂಪರ್ಕ ವೆಚ್ಚದ ಕಡೆ ಹೊಂದಾಣಿಕೆ ಮಾಡಬಹುದೆಂದು ಅಥವಾ ಅಂತಹ ಮೊತ್ತವನ್ನು ಹಿಂಬರಿಸಬಹುದೆಂದು ಹಾಗೂ ಬೇರೆವರ್ಗದವರ ವಂತಿಗೆಯನ್ನು ಮುಂದುವರಿಸಲು ತೀರ್ಮಾನಿಸಲಾಗಿದೆ. ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: 162 ಎಂಎನ್‌ಐ 2005 (ಪಿ), ಬೆಂಗಳೂರು, ದಿನಾಂಕ: 25ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಗಣಿಸಿ ಸರ್ಕಾರಿ ಆದೇಶ ಸಂಖ್ಯೆ: 145 ಎಂಎನ್‌ಐ 2004 ದಿನಾಂಕ: 28.02.2005ರ ಆದೇಶದಲ್ಲಿ ಬೆಂಗಳೂರು ಮಹಾನಗರ ಪ್ರದೇಶದ ವ್ಯಾಪ್ತಿಯಲ್ಲಿ ಬರುವ, ಬೊಮ್ಮನಹಳ್ಳಿ, ಬ್ಯಾಟರಾಯನಪುರ, ದಾಸರಹಳ್ಳಿ, ಕೃಷ್ಣರಾಜಪುರ, ಮಹದೇವಪುರ, ರಾಜರಾಜೇಶ್ವರಿನಗರ ಮತ್ತು ಯಲಹಂಕ 7 ನಗರ ಸಭೆಗಳು ಮತ್ತು 1 ಕೆಂಗೇರಿ ಪುರಸಭೆಯ ವ್ಯಾಪ್ತಿಯಲ್ಲಿ ಬರುವ 600 ಚದರ ಅಡಿ ವಿಸ್ತೀರ್ಣವುಳ್ಳ ನಿವೇಶನಗಳಲ್ಲಿ ಇರುವಂತಹ ಮನೆಗಳಿಂದ ಬಳಕೆದಾರರಿಂದ ಸಂಗ್ರಹಿಸಬೇಕಾದ ವಂತಿಕೆಯಿಂದ ವಿನಾಯಿತಿ ನೀಡಲಾಗಿದೆ. ಈಗಾಗಲೇ

ಕೆಲವು ನಿವೇಶನದಾರರು ವಂತಿಗೆಯನ್ನು ಕಟ್ಟಿದ್ದರೆ ಅಂಥಹವರನ್ನು ಗುರುತಿಸಿ, ಅಂಥಹ ವಂತಿಗೆ ಮೊತ್ತವನ್ನು ಮುಂದಿನ ಬಿಲ್ಲುಗಳಿಗೆ ಹಾಗೂ ಸಂಪರ್ಕ ವೆಚ್ಚಕ್ಕೆ ಹೊಂದಾಣಿಕೆ ಮಾಡಿಕೊಳ್ಳಬಹುದು ಅಥವಾ ಆ ಮೊತ್ತವನ್ನು ಹಿಂಬರಿಸಬಹುದು. ಉಳಿದಂತೆ ಮೇಲಿನ ಸರ್ಕಾರಿ ಆದೇಶ ಸಂಖ್ಯೆ: 145 ಎಂಎನ್ಐ 2004 ದಿನಾಂಕ: 28.02.2005ರಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವ್ಹಿ.ಆರ್. ಇಲಕಲ್**

ಪಿ.ಆರ್. 532

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ

## ಸಮಾಜ ಕಲ್ಯಾಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಸಕಇ 9 ಬಿಸಿಎ 2006, ಬೆಂಗಳೂರು, ದಿನಾಂಕ: 28ನೇ ಮಾರ್ಚ್, 2006**

ಸರ್ಕಾರಿ ಆದೇಶ ಸಂಖ್ಯೆ: ಸಕಇ 9 ಬಿಸಿಎ 2006, ದಿನಾಂಕ: 14.02.2006ರ ಆದೇಶ ಭಾಗದಲ್ಲಿನ ಮೂರನೇ ಸಾಲಿನಲ್ಲಿರುವ "ಐಸಿಆರ್ ನಮೂನೆಗಳನ್ನು ಮುದ್ರಿಸಲು" ಎಂಬ ಪದದ ನಂತರ "ಐಸಿಆರ್ ತಂತ್ರಜ್ಞಾನದ ಮೂಲಕ ಸಮೀಕ್ಷಾ ಮಾಹಿತಿಯನ್ನು ಸಂಸ್ಕರಣೆ ಮಾಡಿ ಮಾಹಿತಿಯನ್ನು ಪೂರೈಸಲು" ಎಂಬುದಾಗಿ ಸೇರಿಸಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ರಾಮಸ್ವಾಮಿ**

ಪಿ.ಆರ್. 533

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಸಮಾಜ ಕಲ್ಯಾಣ ಇಲಾಖೆ.

## SOCIAL WELFARE SECRETARIAT

**Sub:** Extending of Government Guarantee in favour of National Minorities Development and Finance Corporation for the loan to be raised by Karnataka Minorities Development Corporation-reg.

**Read:** 1. Letter No. KMDC/ BLOCK GUARANTEE/ 2004-05/ 3705 Dated: 09.02.2005 from the Managing Director, Karnataka Minorities Development Corporation, Bangalore.
2. Letter No. NMDFC/ PROJ/ KAR/ 1/ 2005/ 2590 Dated: 01.03.2005 from the National Minorities Development & Finance Corporation, New Delhi.

**Preamble:**

The Karnataka Minorities Development Corporation is implementing various Schemes of the State Government. It also implements various schemes of National Minorities Development and Finance Corporation for the benefit of the Minorities in the State. Under the scheme of National Minorities Development and Finance Corporation, the National Corporation means 85% of the loan portion and release the same through the Karnataka Minorities Development Corporation.

To extend loan facilities to Karnataka Minorities Development Corporation, the State Government has to extend Government Guarantee to the National Minorities Development and Finance Corporation. So for, the State Government has extended Government Guarantee to the extent of Rs.2590.00 Lakhs. The Managing Director, Karnataka Minorities Development Corporation has stated in his letter Dated: 09.02.2005 read above that the National Minorities Development and Finance Corporation has agreed to extend the loan facilities under Direct Loan Scheme.

The Managing Director, Karnataka Minorities Development Corporation has requested the Government to extend Guarantee to the tune of Rs.30.00 Crores (Rupees Thirty Crores only) in favour of National Minorities Development and Finance Corporation to obtain loan facilities for implementation of the Direct Loan Scheme. Hence, the Orders,

**Government Order No. SWD 66 KMDC 2005, Dated: 29th March, 2006**

After due examination of the proposal of the Managing Director, Karnataka Minorities Development Corporation, Government are pleased to extend Government Guarantee to the extent of Rs.10.00 Crores (Rupees Ten Crores only) in favour of National Minorities Development and Finance Corporation, New Delhi so as to enable the Karnataka Minorities Development Corporation to secure loan for implementation of the Direct Loan Scheme subject to payment of 1% Guarantee commission required under Section-5 of the Karnataka Government Guarantee Limitation Act 1999. KMDC has to pay 1% Guarantee Commission, TB rules to be followed, loan recovery to be improved to 80% atleast, loan agreement to be executed.

This Order issues with the concurrence of the Finance Department vide its Note No. FD 38 Exp-3/06 Dated: 28.03.2006.

By Order and in the Name of the Governor of Karnataka,

**K.A. JAVEED**

PR-534

Under Secretary to Government (I/c),

Social Welfare Department.

**WATER RESOURCES SECRETARIAT**

**Sub:** Constitution of District Level Technical Co-ordination Committee (TCC) in respect of schemes pertaining to Artificial Recharge to Ground Water and Rain Water Harvesting-reg.

**Read:** 1. Letter No. T-80/ CGWB/ SWR/2005/1975 Dated: 24.10.2005 the Central Ground Water Board, South Western Region, Bangalore.

**Preamble:**

The Regional Director, Government of India, Ministry of Water Resources, Central Ground Water Board, South Western Region, Bangalore in the letter read above, has informed that the District Level Technical Co-ordination Committee is to be constituted under the Chairmanship of the Deputy Commissioner of concerned district to take up various roles for the implementation of scheme pertaining to Artificial Recharge to Ground Water and Rain Water Harvesting. Intitially, the two districts in Karnataka viz., Chitradurga and Davanagere are considered for implementation of this Scheme.

The role of the District Level Technical Co-ordination Committee is as follows:

I. To monitor the physical and financial progress of the project as per approved schedule and engineering design.

II. To approve the utilisation of funds submitted by the implementing agency/ beneficiaries.

III. To approve the demand for release of balance funds.

IV. To approve the final completion and utilisation certificate.

V. To Disseminate the technical know-how and benefits of the project to other user groups.

**Government Order No. SANEEY 119 AJAA 2003, Bangalore, Dated: 31st March, 2006**

Under the Circumstances explained in the preamble, Government is pleased to constitute the District Level Technical Co-ordination Committee as follows:

| | | |
|---|---|---|
| 1. | Deputy Commissioner of the concerned district | Chairman |
| 2. | Chief Executive Officer, Zilla Panchayat | Vic Chairman |
| 3. | Regional Director, Central Ground Water Borad | Member |
| 4. | District Watershed Development officer, | Member |
| 5. | Joint Director of Agriculture Department | Member |
| 6. | Deputy Director of Horticulture Department | Member |
| 7. | Executive Engineer, Minor Irrigation Division | Member |
| 8. | Exectuive Engineer, Zilla Panchayat | Member |
| 9. | Representative of implementing Agency/ Beneficiary | Member |
| 10. | Senior Geologist (Gound Water Wing) Department of Mines & Geology. | Member Secretary |

By Order and in the Name of the Governor of Karnataka,

**M.N. MANJUNATHA**

Under Secretary to Government,

Water Resources Department (Minor Irrigation).

PR-535

**ವಸತಿ ಸಚಿವಾಲಯ**

**ವಿಷಯ:** ಬಾಗಲಕೋಟೆ, ಬೀದರ್, ಚಿತ್ರದುರ್ಗ, ಧಾರವಾಡ, ಗದಗ್, ಗುಲ್ಬರ್ಗಾ, ಕೋಲಾರ, ಮೈಸೂರು, ಉತ್ತರ ಕನ್ನಡ ಜಿಲ್ಲೆಗಳಲ್ಲಿನ ಕೆಲವು ನಗರ ಆಶ್ರಯ ಸಮಿತಿಗಳ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ ಹೊರಡಿಸಿದ ಆದೇಶಗಳನ್ನು ರದ್ದುಪಡಿಸುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ:ವಇ/ 13/ ಹೆಚ್‌ಎಎಸ್/ 2006, ಬೆಂಗಳೂರು, ದಿನಾಂಕ:22ನೇ ಮಾರ್ಚ್, 2006**

ಬಾಗಲಕೋಟೆ ಜಿಲ್ಲೆಯ ಮುಧೋಳ, ಮಹಲಿಂಗಪುರ, ಬೀದರ್ ಜಿಲ್ಲೆಯ ಬಸವಕಲ್ಯಾಣ, ಧಾರವಾಡ ಜಿಲ್ಲೆಯ ಧಾರವಾಡ, ಹುಬ್ಬಳ್ಳಿ, ಗದಗ್ ಜಿಲ್ಲೆಯ ನರಗುಂದ, ಗುಲ್ಬರ್ಗಾ ಜಿಲ್ಲೆಯ ಗುಲ್ಬರ್ಗಾ, ಚಿತ್ರದುರ್ಗ ಜಿಲ್ಲೆಯ ಹಿರಿಯೂರು, ಕೋಲಾರ ಜಿಲ್ಲೆಯ ಬಾಗೇಪಲ್ಲಿ, ಚಿಕ್ಕಬಳ್ಳಾಪುರ, ಮಾಲೂರು, ಮೈಸೂರು ಜಿಲ್ಲೆಯ ಕೃಷ್ಣರಾಜ ಕ್ಷೇತ್ರ, ಬನ್ನೂರು, ನಂಜನಗೂಡು, ಉತ್ತರಕನ್ನಡ ಜಿಲ್ಲೆಯ ಅಂಕೋಲಾ ಇವುಗಳ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸಿ ಹೊರಡಿಸಿರುವ ಈ ಕೆಳಕಂಡ ಆದೇಶಗಳನ್ನು ಹಿಂತೆಗೆದುಕೊಳ್ಳಲಾಗಿದೆ.

1. ಆದೇಶ ಸಂಖ್ಯೆ:ವಇ/ 13/ ಹೆಚ್‌ಎಎಸ್/ 2006, ದಿನಾಂಕ: 20.01.2006.
2. ಆದೇಶ ಸಂಖ್ಯೆ:ವಇ/ 14/ ಹೆಚ್‌ಎಎಸ್/ 2006, ದಿನಾಂಕ: 20.01.2006.
3. ಆದೇಶ ಸಂಖ್ಯೆ:ವಇ/ 09/ ಹೆಚ್‌ಎಎಸ್/ 2006, ದಿನಾಂಕ: 20.01.2006.
4. ಆದೇಶ ಸಂಖ್ಯೆ:ವಇ/ 03/ ಹೆಚ್‌ಎಎಸ್/ 2006, ದಿನಾಂಕ: 19.01.2006.
5. ಆದೇಶ ಸಂಖ್ಯೆ:ವಇ/ 08/ ಹೆಚ್‌ಎಎಸ್/ 2006, ದಿನಾಂಕ: 23.01.2006.
6. ಆದೇಶ ಸಂಖ್ಯೆ:ವಇ/ 10/ ಹೆಚ್‌ಎಎಸ್/ 2006, ದಿನಾಂಕ: 16.01.2006.
7. ಆದೇಶ ಸಂಖ್ಯೆ:ವಇ/ 04/ ಹೆಚ್‌ಎಎಸ್/ 2006, ದಿನಾಂಕ: 21.01.2006.
8. ಆದೇಶ ಸಂಖ್ಯೆ:ವಇ/ 11/ ಹೆಚ್‌ಎಎಸ್/ 2006, ದಿನಾಂಕ: 16.01.2006.

9. ಆದೇಶ ಸಂಖ್ಯೆ:ವಇ/ 18/ ಹೆಚ್ಎಎಸ್/ 2006, ದಿನಾಂಕ: 17.01.2006.
10. ಆದೇಶ ಸಂಖ್ಯೆ:ವಇ/ 12/ ಹೆಚ್ಎಎಸ್/ 2006, ದಿನಾಂಕ: 23.01.2006.
11. ಆದೇಶ ಸಂಖ್ಯೆ:ವಇ/ 01/ ಹೆಚ್ಎಎಸ್/ 2006, ದಿನಾಂಕ: 03.01.2006.
12. ಆದೇಶ ಸಂಖ್ಯೆ:ವಇ/ 07/ ಹೆಚ್ಎಎಸ್/ 2006, ದಿನಾಂಕ: 23.01.2006.
13. ಆದೇಶ ಸಂಖ್ಯೆ:ವಇ/ 15/ ಹೆಚ್ಎಎಸ್/ 2006, ದಿನಾಂಕ: 20.01.2006.
14. ಆದೇಶ ಸಂಖ್ಯೆ:ವಇ/ 17/ ಹೆಚ್ಎಎಸ್/ 2006, ದಿನಾಂಕ: 21.01.2006.
15. ಆದೇಶ ಸಂಖ್ಯೆ:ವಇ/ 02/ ಹೆಚ್ಎಎಸ್/ 2006, ದಿನಾಂಕ: 19.01.2006.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 536

**ಎಸ್. ಇಂದುಮತಿ**

ಪೀಠಾಧಿಕಾರಿ-2, ವಸತಿ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಸಿ.ವಿ. ಪ್ರಹ್ಲಾದಚಾರ್, ಉಪ ನಿರ್ದೇಶಕರು (ಖಾಗ್ರಾ), ಮತ್ತು ಜಿಲ್ಲಾ ಪಂಚಾಯತ್, ಬೆಂಗಳೂರು ನಗರ ಹಾಗೂ ಶ್ರೀ ಇಂದುಶೇಖರ್, ಜೇನು ಕೃಷಿ ಸಂಘಟಕರು, ಜಿಲ್ಲಾ ಪಂಚಾಯತ್, ಬೆಂಗಳೂರುನಗರ, ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ವಾಕೈ: 178: ಕೈಸೇವಿ: 2003: ಬೆಂಗಳೂರು, ದಿನಾಂಕ:12.08.2004.

2. ಸರ್ಕಾರದ ಆದೇಶ ಸಂಖ್ಯೆ: ವಾಕೈ:178: ಕೈಸೇವಿ: 2003/ ಬೆಂಗಳೂರು/ ದಿನಾಂಕ: 20.11.2004.

3. ಶ್ರೀ ಸಿ.ವಿ. ಪ್ರಹ್ಲಾದಚಾರ್, ಉಪ ನಿರ್ದೇಶಕರು, (ಖಾಗ್ರಾ) ಜಿಲ್ಲಾ ಪಂಚಾಯತ್ (ಬೆಂಗಳೂರು) ರವರಿಗೆ ಕಾರಣ ಕೇಳಿ ನೋಟೀಸ್ ಸಂಖ್ಯೆ: ವಾಕೈ: 178: ಕೈಸೇವಿ:03 ದಿನಾಂಕ: 27.01.2004.

4. ಶ್ರೀ ಇಂದುಶೇಖರ್, ಜೇನು ಕೃಷಿ ಸಂಘಟಕರು, ಜಿಲ್ಲಾ ಪಂಚಾಯತ್ (ಬೆಂಗಳೂರು ರವರಿಗೆ ಕಾರಣ ಕೇಳುವ ನೋಟೀಸ್ ಸಂಖ್ಯೆ: ವಾಕೈ: 178: ಕೈಸೇವಿ:03 ದಿನಾಂಕ: 27.12.2004.

5. ಶ್ರೀ ಸಿ.ವಿ. ಪ್ರಹ್ಲಾದಚಾರ್, ಉಪ ನಿರ್ದೇಶಕರು (ಖಾಗ್ರಾ) ರವರು ಸಲ್ಲಿಸಿರುವ ಲಿಖಿತ ಹೇಳಿಕೆ ದಿನಾಂಕ:21.02.2005.

6. ಶ್ರೀ ಇಂದುಶೇಖರ್, ಜೇನು ಕೃಷಿ ಸಂಘಟಕರು, ಬೆಂಗಳೂರು ರವರು ಸಲ್ಲಿಸಿರುವ ಲಿಖಿತ ಹೇಳಿಕೆ ದಿನಾಂಕ: 02.03.2005.

**ಪ್ರಸ್ತಾವನೆ:**

ಕೇಂದ್ರ ಪುರಸ್ಕೃತ ವಿಶೇಷ ಘಟಕ ಯೋಜನೆಯಡಿ 2002-03ನೇ ಸಾಲಿನಲ್ಲಿ ಅನುದಾನ ಬಿಡುಗಡೆಯಾಗದಿದ್ದರೂ ರೂ.6.00 ಲಕ್ಷಗಳನ್ನು ಡ್ರಾ ಮಾಡಲು ಕಛೇರಿ ಆದೇಶ ನೀಡಿ ಬಿಲ್ಲುಗಳಿಗೆ ಶ್ರೀ ಸಿ.ವಿ. ಪ್ರಹ್ಲಾದಚಾರ್ ಉಪನಿರ್ದೇಶಕರು (ಖಾಗ್ರಾ) ರವರು ಮೇಲು ಸಹಿ ಮಾಡಿರುವುದರಿಂದ ಹಾಗೂ ಶ್ರೀ ಇಂದುಶೇಖರ್ ಜೇನು ಕೃಷಿ ಸಂಘಟಕರು, ಬೆಂಗಳೂರು, ಜಿಲ್ಲಾ ಪಂಚಾಯತ್ (ನಗರ) ಬೆಂಗಳೂರು ಇವರು ಈ ಬಿಲ್ಲುಗಳನ್ನು ಡ್ರಾ ಮಾಡಿ ಅಕ್ರಮ ಎಸಗಿರುವುದು ಮೇಲ್ನೋಟಕ್ಕೆ ಸತ್ಯಾಂಶದಿಂದ ಕೂಡಿರುವುದರಿಂದ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ ಶ್ರೀ ಸಿ.ವಿ. ಪ್ರಹ್ಲಾದಚಾರ್, ಉಪ ನಿರ್ದೇಶಕರು, (ಖಾಗ್ರಾ) ಹಾಗೂ ಶ್ರೀ ಇಂದುಶೇಖರ್ ಜೇನು ಕೃಷಿ ಸಂಘಟಕರು, ಇವರುಗಳನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ 1957ರ ನಿಯಮ 10(1) (ಡಿ) ರನ್ವಯ ಮೇಲೆ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶಧಲ್ಲಿ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ ಈ ಇಬ್ಬರು ಅಧಿಕಾರಿ/ ನೌಕರರ ವಿರುದ್ಧ ವಿಚಾರಣೆಯನ್ನು ಕಾಯ್ದಿರಿಸಿ ಇವರುಗಳ ಅಮಾನತ್ತನ್ನು ರದ್ದುಗೊಳಿಸಿ ಸೇವೆಗೆ ಪುನರ್ ಸ್ಥಾಪಿಸಲಾಯಿತು.

ಶ್ರೀ ಸಿ.ವಿ. ಪ್ರಹ್ಲಾದಚಾರ್, ಉಪ ನಿರ್ದೇಶಕರು (ಖಾಗ್ರಾ) ಜಿಲ್ಲಾ ಪಂಚಾಯತ್, ಬೆಂಗಳೂರು ನಗರ ಹಾಗೂ ಶ್ರೀ ಇಂದುಶೇಖರ್, ಜೇನು ಕೃಷಿ ಸಂಘಟಕರು, ಜಿಲ್ಲಾ ಪಂಚಾಯತ್ ಬೆಂಗಳೂರು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ 2002-03ನೇ ಸಾಲಿನ ಕೇಂದ್ರ ಪುರಸ್ಕೃತ ಯೋಜನೆಯಂತೆ ವಿಶೇಷ ಘಟಕ ಯೋಜನೆಯಡಿ ಅನುದಾನ ಬಿಡುಗಡೆಯಾಗದಿದ್ದರೂ ಕೂಡ ರೂ.6.00 ಲಕ್ಷಗಳನ್ನು ಖಜಾನೆಯಿಂದ ಡ್ರಾ ಮಾಡಲು ಮಂಜೂರಾತಿ ನೀಡಿ ಅನುದಾನ ಡ್ರಾ ಮಾಡಿ ಕರ್ತವ್ಯ ಲೋಪ ಎಸಗಿರುವುದು ಸರ್ಕಾರಿ ನೌಕರರಿಗೆ ಸಲ್ಲದ ವರ್ತನೆಯಾಗಿದ್ದು ಇದರಿಂದ ಇವರು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3ಕ್ಕೆ ವಿರುದ್ಧವಾಗಿರುತ್ತದೆ. ಆದುದರಿಂದ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿ ಮೇಲೆ ಕ್ರಮ ಸಂಖ್ಯೆ: 3ರಲ್ಲಿ ಓದಲಾದ ಕಾರಣ ಕೇಳುವ ನೋಟೀಸ್‌ನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ಪತ್ರ ಅನುಬಂಧ-1 ರಿಂದ 4ನ್ನು ಶ್ರೀ ಸಿ.ವಿ. ಪ್ರಹ್ಲಾದಚಾರ್, ಉಪ ನಿರ್ದೇಶಕರು (ಖಾಗ್ರಾ) ರವರಿಗೆ ಜಾರಿ ಮಾಡಲಾಗಿತ್ತು. ಹಾಗೂ ಇದೇ ಆರೋಪಕ್ಕೆ ಸಂಬಂಧಿಸಿದಂತೆ ದೋಷಾರೋಪಣಾ ಪಟ್ಟಿಯೊಂದಿಗೆ ಮೇಲೆ ಓದಲಾದ ಕಾರಣ ಕೇಳುವ ನೋಟೀಸ್‌ನ್ನು ಮೇಲೆ ಓದಲಾದ ಕ್ರಮ ಸಂಖ್ಯೆ: 4ರಲ್ಲಿ ಶ್ರೀ ಇಂದುಶೇಖರ್, ಜೇನು ಕೃಷಿ ಸಂಘಟಕರು, ಬೆಂಗಳೂರು ನಗರ ಜಿಲ್ಲೆ ಇವರಿಗೆ ಜಾರಿ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: 5ರ ಪತ್ರದಲ್ಲಿ ಶ್ರೀ ಪ್ರಹ್ಲಾದಚಾರ್, ಇವರು ಲಿಖಿತ ರಕ್ಷಣಾ ಹೇಳಿಕೆಯನ್ನು ಹಾಗೂ ಕ್ರಮ ಸಂಖ್ಯೆ 6ರ ಪತ್ರದಲ್ಲಿ ಶ್ರೀ ಇಂದುಶೇಖರ್, ಜೇನು ಕೃಷಿ ಸಂಘಟಕರು, ಜಿಲ್ಲಾ ಪಂಚಾಯತ್, ಬೆಂಗಳೂರು ನಗರ ಇವರು ತಮ್ಮ ರಕ್ಷಣಾ ಹೇಳಿಕೆ ಸಲ್ಲಿಸಿದ್ದು ಇದರಲ್ಲಿ ಇಬ್ಬರು ಅಧಿಕಾರಿ/ ನೌಕರರು ತಮ್ಮ ಮೇಲೆ ಹೊರಿಸಿರುವ ಆರೋಪಗಳನ್ನು ಅಲ್ಲಗಳೆದಿರುತ್ತಾರೆ. ಸರ್ಕಾರವು ಇವರ ಲಿಖಿತ ಹೇಳಿಕೆಯನ್ನು ಪರಿಶೀಲಿಸಿ ಇವರಲ್ಲಿ ಒಪ್ಪಿಕೊಳ್ಳುವಂತಹ ಅಂಶಗಳು ಇರುವುದಿಲ್ಲವಾದ ಕಾರಣ ಈ ಪ್ರಕರಣದಲ್ಲಿ ಸತ್ಯಾ-ಸತ್ಯಾತೆಯನ್ನು ತಿಳಿಯಲು ಮುಂದಿನ ವಿಚಾರಣೆ ನಡೆಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ವಾಕೈ/ 305/ ಕೈಸೇವಿ/ 2005/ ಬೆಂಗಳೂರು, ದಿನಾಂಕ:21ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಸಿ.ವಿ. ಪ್ರಹ್ಲಾದಚಾರ್, ಉಪ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಹಾಗೂ ಇಂದು ಶೇಖರ್, ಜೇನು ಕೃಷಿ ಸಂಘಟಕರು, ಇವರುಗಳು ಈ ಹಿಂದೆ ಉಪ ನಿರ್ದೇಶಕರು, ಖಾದಿ ಮತ್ತು ಗ್ರಾಮೋದ್ಯೋಗ, ಜಿಲ್ಲಾ

ಪಂಚಾಯತ್, ಬೆಂಗಳೂರು (ನಗರ) ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿದರೆನ್ನಲಾದ ಆರೋಪಗಳಿಗೆ ಸಂಬಂಧಿಸಿದಂತೆ ಅವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಈ ಪ್ರಕರಣದಲ್ಲಿ ನಿವೃತ್ತ ನ್ಯಾಯಾಧೀಶರಾದ ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಂಬರ್ 239/1 ನಾಗಶ್ರೀ ನಿಲಯ, 4ನೇ ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು-18, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಉಪ ನಿರ್ದೇಶಕರು, (ಆಡಳಿತ) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ನಿರ್ದೇಶಕರ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿರುವ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಒದಗಿಸಲು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶ್ರೀಘ್ರಲಿಪಿಗಾರರ/ ಬೆರಳಚ್ಚುಗಾರರ/ ಸಹಾಯವನ್ನು ಮತ್ತು ಲೇಖನ ಸಾಮಗ್ರಿಗಳನ್ನು ಒದಗಿಸಲು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ನಿರ್ದೇಶನಾಲಯ ಇವರಿಗೆ ಸೂಚಿಸಲಾಗಿದೆ.

ಈ ಪ್ರಕರಣದ ವಿಚಾರಣೆಗಾಗಿ ರೂ.5,000/- (ರೂಪಾಯಿ ಐದು ಸಾವಿರ ಮಾತ್ರ) ಮತ್ತು ವಾಹನ ಭತ್ಯೆ ರೂ.1000/- (ರೂಪಾಯಿ ಒಂದು ಸಾವಿರ ಮಾತ್ರ) ಸಂಚಿತ ಸಂಭಾವನೆಗಳನ್ನು ವಿಚಾರಣಾಧಿಕಾರಿಗಳು, ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ಕೈಗಾರಿಕಾಭಿವೃದ್ಧಿ ಆಯುಕ್ತರೇ ಪಾವತಿ ಮಾಡುವುದು.

ವಿಚಾರಣಾಧಿಕಾರಿಗಳು ಮೂರು ತಿಂಗಳೊಳಗಾಗಿ ವಿಚಾರಣೆಯನ್ನು ಪೂರೈಸಿ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಪಿ.ಆರ್. 537

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು).

## ಶಿಕ್ಷಣ ಸಚಿವಾಲಯ

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಹುಬ್ಬಳ್ಳಿಯ ಅಲ್-ಮೀಜನ್ ಎಜುಕೇಷನಲ್ ಅಸೋಸಿಯೇಷನ್‌ನ ಹುಬ್ಬಳ್ಳಿಯಲ್ಲಿನ ಅಲ್-ಮೀಜನ್ ಎಜುಕೇಷನಲ್ ಅಸೋಸಿಯೇಷನ್ಸ್ ಬಿ.ಎಡ್. ಕಾಲೇಜಿಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:** 1. ದಿನಾಂಕ: 21.02.2004ರ ಸಂಖ್ಯೆ: ಇಡಿ 250 ಯುಆರ್‌ಸಿ 2003ರ ಸರ್ಕಾರಿ ಆದೇಶ.

2. ದಿನಾಂಕ: 21.12.2005, ಸಂಖ್ಯೆ:F.SRO/NCTE/B.Ed/2005-06/4826ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.

3. ದಿನಾಂಕ: 23.02.2006ರ ಅಧ್ಯಕ್ಷರು, ಅಲ್-ಮೀಜನ್ ಎಜುಕೇಷನಲ್ ಅಸೋಸಿಯೇಷನ್, ಹುಬ್ಬಳ್ಳಿ, ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ ವಿಶ್ವವಿದ್ಯಾಲಯ/ ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ ಬಿ.ಪಿ.ಎಡ್, ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು, ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಹುಬ್ಬಳ್ಳಿಯ ಅಲ್-ಮೀಜನ್ ಎಜುಕೇಷನಲ್ ಅಸೋಸಿಯೇಷನ್‌ನ ಹುಬ್ಬಳ್ಳಿಯಲ್ಲಿನ ಅಲ್-ಮೀಜನ್ ಎಜುಕೇಷನಲ್ ಅಸೋಸಿಯೇಷನ್ಸ್ ಬಿ.ಎಡ್. ಕಾಲೇಜಿಗೆ ಬಿ.ಎಡ್. ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ: 21.12.2005ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ದಿನಾಂಕ: 23.02.2006ರ ಪತ್ರದಲ್ಲಿ ಸದರಿ ಸಂಸ್ಥೆಯ ಅಧ್ಯಕ್ಷರು ತಮ್ಮ ಕಾಲೇಜಿನಲ್ಲಿ ಬಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಆದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 11 ಯುಕೆವಿ 2006, ಬೆಂಗಳೂರು, ದಿನಾಂಕ:31ನೇ ಮಾರ್ಚ್, 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಹುಬ್ಬಳ್ಳಿಯ ಅಲ್-ಮೀಜನ್ ಎಜುಕೇಷನಲ್ ಅಸೋಸಿಯೇಷನ್‌ನ ಹುಬ್ಬಳ್ಳಿಯಲ್ಲಿನ ಅಲ್-ಮೀಜನ್ ಎಜುಕೇಷನಲ್ ಅಸೋಸಿಯೇಷನ್ಸ್ ಬಿ.ಎಡ್. ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 538

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರಿನ ಬಿ.ಟಿ.ಎಲ್. ಎಜುಕೇಷನಲ್ ಟ್ರಸ್ಟ್ ಫಾರ್ ರೂರಲ್ ಡೆವಲಪ್‌ಮೆಂಟ್‌ನ ಬಿ.ಟಿ.ಎಲ್. ಕಾಲೇಜ್ ಆಫ್ ಎಜುಕೇಷನ್, ನಂ.259/ಬಿ, ಬೊಮ್ಮಸಂದ್ರ ಇಂಡಸ್ಟ್ರಿಯಲ್ ಏರಿಯಾ, ಹೊಸೂರು ರೋಡ್, ಬೆಂಗಳೂರು, ಈ ಕಾಲೇಜಿಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:** 1. ದಿನಾಂಕ: 08.01.2004ರ ಸಂಖ್ಯೆ: ಇಡಿ 24 ಯುಆರ್‌ಸಿ 2004ರ ಸರ್ಕಾರಿ ಆದೇಶ.

2. ದಿನಾಂಕ: 30.01.2006, ಸಂಖ್ಯೆ:F.SRO/NCTE/B.Ed/2005-06/5262ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.

3. ದಿನಾಂಕ: 27.01.2006ರ ಬಿ.ಟಿ.ಎಲ್. ಎಜುಕೇಷನಲ್ ಟ್ರಸ್ಟ್ ಫಾರ್ ರೂರಲ್ ಡೆವಲಪ್‌ಮೆಂಟ್‌ನ ಗೌರವ ಕಾರ್ಯದರ್ಶಿಯವರ ಪತ್ರ.

**ಪೀಠಿಕೆ:**

1) ಸರ್ಕಾರಿ/ ವಿಶ್ವವಿದ್ಯಾಲಯ/ ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ ಬಿ.ಪಿ.ಎಡ್, ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು, ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಬೆಂಗಳೂರಿನ ಬಿ.ಟಿ.ಎಲ್. ಎಜುಕೇಷನಲ್ ಟ್ರಸ್ಟ್ ಫಾರ್ ರೂರಲ್ ಡೆವಲಪ್‌ಮೆಂಟ್‌ನ ಬಿ.ಟಿ.ಎಲ್. ಕಾಲೇಜ್ ಆಫ್ ಎಜುಕೇಷನ್‌ಗೆ ಬಿ.ಎಡ್. ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ:30.01.2006ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ದಿನಾಂಕ:27.01.2006ರ ಪತ್ರದಲ್ಲಿ ಸದರಿ ಸಂಸ್ಥೆಯ ಗೌರವ ಕಾರ್ಯದರ್ಶಿಯವರು ತಮ್ಮ ಕಾಲೇಜಿನಲ್ಲಿ ಬಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 23 ಯುಬಿವಿ 2006, ಬೆಂಗಳೂರು, ದಿನಾಂಕ:29ನೇ ಮಾರ್ಚ್, 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರಿನ ಬಿ.ಟಿ.ಎಲ್. ಎಜುಕೇಷನಲ್ ಟ್ರಸ್ಟ್ ಫಾರ್ ರೂರಲ್ ಡೆವಲಪ್‌ಮೆಂಟ್‌ನ ಬಿ.ಟಿ.ಎಲ್. ಕಾಲೇಜ್ ಆಫ್ ಎಜುಕೇಷನ್‌ನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 539

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಚಿತ್ರದುರ್ಗ ಜಿಲ್ಲೆ ಹೊಸದುರ್ಗದ ಶ್ರೀ ವಿಜಯ ಸಂಗಮ ಶಿಕ್ಷಣ ಮತ್ತು ಗ್ರಾಮೀಣ ಅಭಿವೃದ್ಧಿ ಸಂಸ್ಥೆಯ ಹೊಸದುರ್ಗದಲ್ಲಿನ ಶ್ರೀ ವಿಜಯ ಸಂಗಮ ಶಿಕ್ಷಣ ಮಹಾವಿದ್ಯಾಲಯಕ್ಕೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:** 1. ದಿನಾಂಕ: 27.12.2003ರ ಸಂಖ್ಯೆ: ಇಡಿ 167 ಯುಆರ್‌ಸಿ 2003ರ ಸರ್ಕಾರಿ ಆದೇಶ.

2. ದಿನಾಂಕ:15.03.2006, ಸಂಖ್ಯೆ:F.SRO/NCTE/B.Ed/2005-06/5626ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.

3. ದಿನಾಂಕ:15.03.2006ರ ಆಡಳಿತಾಧಿಕಾರಿ ಶ್ರೀ ವಿಜಯ ಸಂಗಮ ಶಿಕ್ಷಣ ಮತ್ತು ಗ್ರಾಮೀಣ ಅಭಿವೃದ್ಧಿ ಸಂಸ್ಥೆ, ಹೊಸದುರ್ಗ, ಇವರಪತ್ರ.

**ಪೀಠಿಕೆ:**

1) ಸರ್ಕಾರಿ/ ವಿಶ್ವವಿದ್ಯಾಲಯ/ ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ ಬಿ.ಪಿ.ಎಡ್, ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು, ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಚಿತ್ರದುರ್ಗ ಜಿಲ್ಲೆ ಹೊಸದುರ್ಗದ ಶ್ರೀ ವಿಜಯ ಸಂಗಮ ಶಿಕ್ಷಣ ಮತ್ತು ಗ್ರಾಮೀಣ ಅಭಿವೃದ್ಧಿ ಸಂಸ್ಥೆಯ ಹೊಸದುರ್ಗದಲ್ಲಿರುವ ಶ್ರೀ ವಿಜಯ ಸಂಗಮ ಶಿಕ್ಷಣ ಮಹಾವಿದ್ಯಾಲಯಕ್ಕೆ ಬಿ.ಎಡ್. ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ:15.03.2006ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ದಿನಾಂಕ:15.03.2006ರ ಪತ್ರದಲ್ಲಿ ಸದರಿ ಸಂಸ್ಥೆಯ ಆಡಳಿತಾಧಿಕಾರಿಯವರು ತಮ್ಮ ಕಾಲೇಜಿನಲ್ಲಿ ಬಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 37 ಯುಆರ್‌ಸಿ 2006, ಬೆಂಗಳೂರು, ದಿನಾಂಕ:28ನೇ ಮಾರ್ಚ್, 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಚಿತ್ರದುರ್ಗ ಜಿಲ್ಲೆ ಹೊಸದುರ್ಗದ ಶ್ರೀ ವಿಜಯ ಸಂಗಮ ಶಿಕ್ಷಣ ಮತ್ತು ಗ್ರಾಮೀಣ ಅಭಿವೃದ್ಧಿ ಸಂಸ್ಥೆಯ ಹೊಸದುರ್ಗದಲ್ಲಿನ ಶ್ರೀ ವಿಜಯ ಸಂಗಮ ಶಿಕ್ಷಣ ಮಹಾವಿದ್ಯಾಲಯದ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 540

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲದ ಮಾರ್ಡನ್ ಎಜುಕೇಷನ್ ಟ್ರಸ್ಟ್‌ನ ನೆಲಮಂಗಲದಲ್ಲಿನ ಶುತ್ತಾರಿಯಾ ಕಾಲೇಜ್ ಆಫ್ ಎಜುಕೇಷನ್‌ಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಉಲ್ಲೇಖ:** 1. ದಿನಾಂಕ: 27.12.2003ರ ಸಂಖ್ಯೆ: ಇಡಿ 427 ಯುಆರ್‌ಸಿ 2003ರ ಸರ್ಕಾರಿ ಆದೇಶ.

2. ದಿನಾಂಕ:31.01.2006, ಸಂಖ್ಯೆ:F.SRO/NCTE/B.Ed/2005-06/5277ರ NCTEಯ ಪ್ರಾದೇಶಿಕ ನಿರ್ದೇಶಕರ ಪತ್ರ.

3. ದಿನಾಂಕ:06.03.2006ರ ಅಧ್ಯಕ್ಷರು ಮಾರ್ಡನ್ ಎಜುಕೇಷನ್ ಟ್ರಸ್ಟ್ (ರಿ), ನೆಲಮಂಗಲ, ಬೆಂಗಳೂರು ಇವರ ಪತ್ರ.

**ಪೀಠಿಕೆ:**

1) ಸರ್ಕಾರಿ/ ವಿಶ್ವವಿದ್ಯಾಲಯ/ ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ ಬಿ.ಪಿ.ಎಡ್, ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು, ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶದಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲದ ಮಾರ್ಡನ್ ಎಜುಕೇಷನ್ ಟ್ರಸ್ಟ್‌ನ ನೆಲಮಂಗಲದಲ್ಲಿನ ಶುತ್ತಾರಿಯಾ ಕಾಲೇಜ್ ಆಫ್ ಎಜುಕೇಷನ್‌ಗೆ ಬಿ.ಎಡ್. ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2)ರಲ್ಲಿರುವ ದಿನಾಂಕ:31.01.2006ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3)ರಲ್ಲಿರುವ ದಿನಾಂಕ:06.03.2006ರ ಪತ್ರದಲ್ಲಿ ಸದರಿ ಸಂಸ್ಥೆಯ ಅಧ್ಯಕ್ಷರು ತಮ್ಮ ಕಾಲೇಜಿನಲ್ಲಿ ಬಿ.ಎಡ್ ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 38 ಯುಆರ್‌ಸಿ 2006, ಬೆಂಗಳೂರು, ದಿನಾಂಕ:28ನೇ ಮಾರ್ಚ್, 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ನೆಲಮಂಗಲದ ಮಾರ್ಡನ್ ಎಜುಕೇಷನ್ ಟ್ರಸ್ಟ್‌ನ ನೆಲಮಂಗಲದಲ್ಲಿನ ಶುತ್ತಾರಿಯಾ ಕಾಲೇಜ್ ಆಫ್ ಎಜುಕೇಷನ್‌ನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 541

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

**ವಿಷಯ:** 2005-06ನೇ ಶೈಕ್ಷಣಿಕ ಸಾಲಿನಿಂದ ಬೀದರ್ ವಿದ್ಯಾವಿಕಾಸ ಟ್ರಸ್ಟ್ (ರಿ) ನ ಗೋವಿಂದರಾವ್ ಮುಳೆ ಶಿಕ್ಷಣ (ಬಿ.ಎಡ್) ಕಾಲೇಜಿಗೆ ಸಂಯೋಜನೆ.

**ಓದಲಾಗಿದೆ:** 1. ದಿನಾಂಕ: 26.12.2003ರ ಸಂಖ್ಯೆ: ಇಡಿ 222 ಯುಜಿವಿ 2003ರ ಸರ್ಕಾರಿ ಆದೇಶ.

2. ದಿನಾಂಕ:03.01.2006, ಸಂಖ್ಯೆ:F.SRO/NCTE/B.Ed/2005-06/5063ರ NCTEಯ ದಕ್ಷಿಣ ಪ್ರಾದೇಶಿಕ ಸಮಿತಿಯ ಆದೇಶ.

3. ವಿದ್ಯಾವಿಕಾಸ ಟ್ರಸ್ಟ್‌ನ ಕಾರ್ಯದರ್ಶಿಯವರ ದಿನಾಂಕ: 14.02.2006, ಸಂಖ್ಯೆ: ವಿವಿಟಿ/ ಬಿ.ಎಡ್/ 10/ 2005-06ರ ಪತ್ರ.

**ಪೀಠಿಕೆ:**

1) ಸರ್ಕಾರಿ/ ವಿಶ್ವವಿದ್ಯಾಲಯ/ ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ ಬಿ.ಪಿ.ಎಡ್, ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ 1993ರ ಎನ್.ಸಿ.ಟಿ.ಇ.ಯ ಅಧಿನಿಯಮ 14ನೇ ಪ್ರಕರಣದಡಿ ಎನ್.ಸಿ.ಟಿ.ಇ. ಯು ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು 2000ರ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮದ 59 (18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ 1999ರ ಬಿ.ಎಡ್. ಮತ್ತು ಟಿ.ಸಿ.ಹೆಚ್. ಕೋರ್ಸುಗಳ ಪ್ರವೇಶಕ್ಕೆ ಕರ್ನಾಟಕ ಅಭ್ಯರ್ಥಿಗಳ ಆಯ್ಕೆ ನಿಯಮಾಗಳ 2(1)(ಎ)ನ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ದಿನಾಂಕ: 26.12.2003, ಸಂಖ್ಯೆ: ಇಡಿ 222 ಯುಜಿವಿ 2003ರ ಸರ್ಕಾರಿ ಆದೇಶದಲ್ಲಿ ಬೀದರ್‌ನ ವಿದ್ಯಾವಿಕಾಸ ಟ್ರಸ್ಟ್ (ರಿ) ಬೀದರ್‌ನಲ್ಲಿ ಸ್ಥಾಪಿಸಲು ಉದ್ದೇಶಿಸಿದ್ದ ಶಿಕ್ಷಣ (ಬಿ.ಎಡ್) ಕಾಲೇಜಿನಲ್ಲಿ ಬಿ.ಎಡ್. ಕೋರ್ಸನ್ನು 100 (ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ದಿನಾಂಕ:03.01.2006, ಸಂಖ್ಯೆ:F.SRO/NCTE/B.Ed/2005-06/5063ರ ಎನ್.ಸಿ.ಟಿ.ಇ.ಯ ದಕ್ಷಿಣ ಪ್ರಾದೇಶಿಕ ಸಮಿತಿಯ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್ ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100 (ನೂರು) ವಿದ್ಯಾರ್ಥಿ ಪ್ರಮಾಣದೊಂದಿಗೆ ಮಾನ್ಯತೆ ನೀಡಿದೆ. ದಿನಾಂಕ: 14.02.2006, ಸಂಖ್ಯೆ: ವಿವಿಟಿ/ ಬಿ.ಎಡ್/ 10/ 2005-06ರ ಪತ್ರದಲ್ಲಿ ವಿದ್ಯಾವಿಕಾಸ ಟ್ರಸ್ಟ್‌ನ ಕಾರ್ಯದರ್ಶಿಯವರು ಸದರಿ ಕಾಲೇಜಿನಲ್ಲಿ ಬಿ.ಎಡ್. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದಕ್ಕಾರಿ, ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 19 ಯುಜಿವಿ 2006, ಬೆಂಗಳೂರು, ದಿನಾಂಕ:21ನೇ ಮಾರ್ಚ್, 2006**

3) 2000ರ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 59ನೇ ಪ್ರಕರಣದ 18ನೇ ಉಪ ಪ್ರಕರಣದೊಂದಿಗೆ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ 1999ರ ಬಿ.ಎಡ್. ಮತ್ತು ಟಿ.ಸಿ.ಹೆಚ್. ಕೋರ್ಸುಗಳ ಪ್ರವೇಶಕ್ಕೆ ಕರ್ನಾಟಕ ಅಭ್ಯರ್ಥಿಗಳ ಆಯ್ಕೆ ನಿಯಮಗಳ 2(1)(ಎ)ನ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬೀದರ್‌ನ ವಿದ್ಯಾವಿಕಾಸ ಟ್ರಸ್ಟ್ (ರಿ)ನ ಗೋವಿಂದರಾವ್ ಮುಳೆ ಶಿಕ್ಷಣ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಶೈಕ್ಷಣಿಕ ಸಾಲಿನಿಂದ ಅನ್ವಯವಾಗುವಂತೆ 100(ನೂರು) ವಿದ್ಯಾರ್ಥಿ ಪ್ರಮಾಣವನ್ನು ನಿಗದಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 459

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)